# ಶಿಕ್ಷಕರು ಒಗ್ಗೂಡಿದರೆ  ಕೆಲಸವಾಗುತ್ತದೆ !

ಉಮಾಶಂಕರ್ ಪಿರಿಯೋಡಿ

ಉತ್ತಮ ಶಾಲೆಯೊಂದನ್ನು ರೂಪಿಸಲು ಬೇಕಾದ ಮಾದರಿಯೊಂದನ್ನು ಹುಡುಕುವುದರಲ್ಲೇ ಇಷ್ಟು ವರ್ಷ ಕಳೆಯಿತು. ಈ ಪ್ರಕ್ರಿಯೆ ಹೇಗೆ ಅನಾವರಣಗೊಂಡಿತು ಎಂದು ಹೇಳಲಿಚ್ಛಿಸುತ್ತೇನೆ. ಉತ್ತಮ ಶಾಲೆಯೊಂದನ್ನು ರೂಪಿಸಲು ಬೇಕಾದ ಅಂಶಗಳು ಅಥವಾ ಮಾದರಿಯನ್ನು ಹುಡುಕುವುದರಿಂದ ಆರಂಭವಾಗಿ, ಕೇವಲ ಒಂದು ಅಂಶ ಅಥವಾ ಕಾರಣದಿಂದ ಒಂದು ಉತ್ತಮ ಶಾಲೆಯನ್ನು ರೂಪಿಸಲು ಆಗುವುದಿಲ್ಲ ಎಂದು ಈ ಪ್ರಕ್ರಿಯೆಯು ಒಂದು ಕನಿಷ್ಠ ಮಟ್ಟದ ಅರಿವನ್ನು ಮೂಡಿಸಿದೆ. ಶಿಕ್ಷಣ ಕ್ಷೇತ್ರಕ್ಕೆ ಹೊಸತಲ್ಲದ ವಿಚಾರವಾದರೂ, ನಮಗಿದು ಕಠಿಣ ಕಲಿಕೆಯಾಗಿದೆ. ಒಂದು ದಶಕಕ್ಕೂ ಮೀರಿ ಕೈಜೋಡಿಸಿ ಕೆಲಸ ಮಾಡುತ್ತಿರುವ ಶಾಲೆಗಳಿಂದ ಎರಡು ಅಂಶಗಳನ್ನು ಕಂಡುಕೊಂಡಿದ್ದೇವೆ : ಶಿಕ್ಷಕರು ಒಗ್ಗೂಡಿ ಕೆಲಸಮಾಡುವುದು ಮತ್ತು ಪ್ರಜಾತಾಂತ್ರಿಕ ಮೌಲ್ಯಗಳನ್ನು ಪಾಲಿಸುವ ನಾಯಕತ್ವ- ಇವೇ ಮಹತ್ವವಾದುದು.

2003 ರಲ್ಲಿ ನಾನು ಈ ಸಾಂಪ್ರದಾಯಿಕ ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟೆ. ಅಲ್ಲಿಯವರೆಗೂ ನನ್ನ ಅನುಭವವು ಅಸಾಂಪ್ರದಾಯಿಕ ಅಥವಾ ಅನೌಪಚಾರಿಕ ಶಿಕ್ಷಣದಲ್ಲಿ; ಅದರಲ್ಲಿಯೂ ವಯಸ್ಕರ ಶಿಕ್ಷಣದಲ್ಲಿ ಹೆಚ್ಚಿತ್ತು.  ಪ್ರತಿಷ್ಠಾನದಲ್ಲೂ ಸಹ ನಾವು ಆಗಷ್ಟೇ ಕಾಯಾಚರಣೆ ಪ್ರಾರಂಭಿಸಿದ್ದೆವು; ಬದಲಾವಣೆಯನ್ನು ತರಬಲ್ಲ ಪರಿಣಾಮಕಾರಿ ವಿಧಿವಿಧಾನಗಳನ್ನು ಹುಡುಕುವ ಪ್ರಕ್ರಿಯೆಯನ್ನು ಆಗಷ್ಟೇ ಆರಂಭಿಸಿದ್ದೆವು. ಶಾಲೆಗಳಲ್ಲಿ ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಒದಗಿಸಲು ಬೇಕಾದ ಉತ್ತಮ ವಿಧಾನವನ್ನು ಕಂಡುಕೊಳ್ಳಲು ಈ ಕ್ಷೇತ್ರದಲ್ಲಿ ಕೆಲಸಮಾಡುತ್ತಿರುವ ಹಲವಾರು ತಜ್ಞರನ್ನು ಭೇಟಿ ಮಾಡಿದೆವು. ಈ ಕ್ಷೇತ್ರವನ್ನು ಅರಿಯಲು ತಜ್ಞರೊಡನೆ ಸಮಾಲೋಚಿಸಿ, ಅಧ್ಯಯನಗಳಲ್ಲಿ ತೊಡಗಿಸಿಕೊಂಡೆವು. ಪ್ರೊ॥ ಜಲಾಲುದ್ದೀನ್(NEEV -ನೆಟ್‌ವರ್ಕ ಆಫ್ ಎಂಟರ್‌ಪ್ರೈಸಿಂಗ್ ಎಜುಕೇಷನಲ್ ವೆಂಚರ್ ಅನ್ನು ಮುನ್ನಡೆಸುತ್ತಿರುವವರು. 90ರ ದಶಕದಲ್ಲಿ ಡೈರೆಕ್ಟರ್ NCERT) ಅವರನ್ನು ಸಂಪರ್ಕಿಸಿ, ಉತ್ತಮ ಶಾಲೆಯೊಂದನ್ನು ರೂಪಿಸಲು ಬೇಕಾದ ಅಂಶಗಳನ್ನು ಅರಿಯಲು ಅಧ್ಯಯನವೊಂದನ್ನು ನಡೆಸಿಕೊಡಲು ಕೇಳಿಕೊಂಡೆವು. "ಉತ್ತಮ ಶಾಲೆಯೊಂದನ್ನು ರೂಪಿಸಲು ಅವಶ್ಯಕವಾದ ಒಂದೇ ಒಂದು ಅಂಶವೂ ಹುಡುಕಿದರೆ ನಿಮಗೆ ಸಿಗುವುದಿಲ್ಲ, ಅಲ್ಲದೇ ಉತ್ತಮ ಶಾಲೆ ಎಂದೆನಿಸಿಕೊಳ್ಳುವ ಮಾದರಿಯೂ ಇಲ್ಲ. ಹಲವಾರು ಅಂಶಗಳು ಕೂಡಿ ಉತ್ತಮ ಶಾಲೆಯೊಂದು ರೂಪುಗೊಳ್ಳುತ್ತದೆ ಹಾಗೂ ಒಂದೊಂದು ಶಾಲೆಯಲ್ಲೂ ಅಂಶಗಳು ವಿಭಿನ್ನವಾಗಿರುತ್ತದೆ. ಉತ್ತಮ ಶಾಲೆ ರೂಪಿಸಲು ಏನು ಬೇಕು ಎಂಬ ಪ್ರಶ್ನೆಗೆ ಒಂದೇ ಉತ್ತರವಿಲ್ಲ.  ಹುಡುಕುವುದರಲ್ಲಿ ಅರ್ಥವಿಲ್ಲ,  ಕೆಲಸಕ್ಕೆ ಇಳಿಯಬೇಕಷ್ಟೆ " ಎಂದು ದಿಗ್ಭ್ರಮೆಗೊಳಿಸುವ ಉತ್ತರವನ್ನಿತ್ತರು.

ನಿಜ, ಇದರಿಂದ ಉತ್ತರ ದೊರಕದಿದ್ದರೂ ದಿಕ್ಕು ತೋರಿತು. ಆನಂತರ ನಾವು ಶಾಲೆಗಳಲ್ಲಿ, ತರಗತಿಯ ಪ್ರಕ್ರಿಯೆಗಳಲ್ಲಿ ಹಾಗೂ ಮುಖ್ಯವಾಗಿ ಶಿಕ್ಷಕರು ಮತ್ತು ಅಧಿಕಾರಿಗಳೊಡನೆ ನಮ್ಮನ್ನು ತೊಡಗಿಸಿಕೊಳ್ಳಲು ಪ್ರಾರಂಭಿಸಿದೆವು. ಮುಖ್ಯವಾಗಿ ಶಿಕ್ಷಕರ ವೃತ್ತಿಪರತೆಯನ್ನು  ಹೆಚ್ಚಿಸುವ ನಿಟ್ಟಿನಲ್ಲಿ ನಾವು ಕಾರ್ಯಪ್ರವೃತ್ತರಾದೆವು. ಶಿಕ್ಷಕರ ಸಾಮರ್ಥ್ಯವನ್ನು ಬಲಪಡಿಸುವುದು ನಮ್ಮ ಕೆಲಸದ ಪ್ರಮುಖ ಅಂಶವಾಯಿತು. ನಮ್ಮ ಕೆಲಸದ ಅವಧಿಯಲ್ಲಿ ಎಲ್ಲ ರೀತಿಯ ಶಾಲೆಗಳನ್ನು ನೋಡಿದೆವು - ಒಳ್ಳೆಯದು ಹಾಗೂ ಉತ್ತಮವಲ್ಲದ್ದು. ಆದರೆ ಅಲ್ಲಿರುವ ಶಿಕ್ಷಕರನ್ನು ನೋಡಿದಾಗ ನಮಗೆ ಭರವಸೆ ಮೂಡಿತು. ಕೆಲವೇ ಕೆಲವು ಉತ್ತಮವಾಗಿ ನಡೆಯುತ್ತಿರುವ ದೂರದ ಶಾಲೆಗಳಲ್ಲಿ ಗುಣಮಟ್ಟದ ಕಲಿಕೆಯನ್ನು ಸಾಧಿಸಿದ ಮಕ್ಕಳನ್ನು ನೋಡಿದೆವು. ಹೆದ್ದಾರಿಗಳಿಂದ ದೂರವಿದ್ದು ಸುಲಭವಾಗಿ ಸೇರುವ ರಸ್ತೆಗಳಿಲ್ಲದ ಕೆಲವು ಶಾಲೆಗಳು ಶಿಸ್ತುಬದ್ಧವಾಗಿ  ಹಾಗೂ ಬಹಳ ಹುರುಪಿನಿಂದ ಮಕ್ಕಳನ್ನು ಶೈಕ್ಷಣಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಿರುವುದನ್ನು ನೋಡಿದೆವು. ಪ್ರತಿಕೂಲ ಸಮುದಾಯವನ್ನು ಶಾಲಾ ಸ್ನೇಹಿ ಭಾಗೀದಾರರಾಗಿ ಮಾಡಿಕೊಂಡು ಶಾಲೆಯನ್ನು ನಡೆಸುವ ಶಿಕ್ಷಕರನ್ನು ನೋಡಿದೆವು. ಸುರಪುರದಲ್ಲಿದ್ದ ಒಬ್ಬ ಯುವ ಶಿಕ್ಷಕ, ರಾಜಮನೆತನಕ್ಕೆ ಸೇರಿದ ದಬ್ಬಾಳಿಕೆ ನಡೆಸುತ್ತಿದ್ದ ಒಬ್ಬ ಪ್ರಬಲ ಜಮೀನ್ದಾರನ ವಿರುದ್ಧ  ಹೋರಾಡಿ ಶಾಲೆಗೆ ಮಂಜೂರಾದ ಜಾಗವನ್ನು ದಕ್ಕಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಇತರರ ಸಹಾಯದಿಂದ ಶಾಲೆಗೆ ಜಾಗವನ್ನು ಪಡೆಯಲು ಯಶಸ್ವಿಯಾದ ಈ ಕಾರ್ಯ, ನನ್ನ ಪ್ರಕಾರ ಶಿಕ್ಷಕನ ಮಟ್ಟಿಗೆ ಒಂದು ಧೈರ್ಯದ ಕೆಲಸವೇ ಸರಿ. ಶೈಕ್ಷಣಿಕವಾಗಿ ಬಹಳಷ್ಟು ಶಾಲೆಗಳು ಉತ್ತಮವಾಗಿ ಕೆಲಸ ಮಾಡುತ್ತಿದ್ದವು.  ಐದು ತರಗತಿಗಳನ್ನು ಒಟ್ಟಿಗೆ ನಿಭಾಯಿಸುತ್ತ ಮಕ್ಕಳ ಕಲಿಕೆಯ ಮಟ್ಟವನ್ನೂ ಉತ್ತಮವಾಗಿ ಇಟ್ಟುಕೊಂಡ ರೇಖಾಳಂತಹ ಶಿಕ್ಷಕಿಯರು ಅನೇಕರಿದ್ದರು. ಈ ಶಾಲೆಗಳಲ್ಲಿ ಕಲಿತ ಮಕ್ಕಳೆಲ್ಲರೂ ಬಹಳ ಆತ್ಮವಿಶ್ವಾಸದಿಂದ ಕೂಡಿದ್ದು ಸ್ವಾವಲಂಬಿಯಾಗಿದ್ದಾರೆ. ಶಾಲೆಯಿಂದ ಹೊರಗುಳಿದ ಮಕ್ಕಳಿಗೆ ಪ್ರಯೋಜನವಾಗುವಂತೆ ಪರಿಹಾರಾತ್ಮಕ ಬೋಧನೆಯನ್ನು ಗಂಭೀರವಾಗಿ ಪರಿಗಣಿಸಿ ಬದ್ಧತೆಯಿಂದ ಪಾಠ ಮಾಡುತ್ತಿರುವ ಶಿಕ್ಷಕರೂ ಇದ್ದಾರೆ. ಮಕ್ಕಳ ಕಲಿಕೆಯನ್ನು ಸಮರ್ಥವಾಗಿ ನಿಭಾಯಿಸಲು ಹೆಚ್ಚುವರಿ ಸಮಯವನ್ನು ನೀಡುವಂತಹ ಶಿಕ್ಷಕರೂ ಇದ್ದಾರೆ. ಬಹಳಷ್ಟು ಶಿಕ್ಷಕರು ಸಮುದಾಯದ ಜನರೊಡನೆ ಹಾಗೂ ಹಳೆಯ ವಿದ್ಯಾರ್ಥಿಗಳೊಂದಿಗೆ ಉತ್ತಮ ಸಂಬಂಧ ಹೊಂದಿದ್ದು, ಅವರೆಲ್ಲರೂ ವಿದ್ಯಾರ್ಥಿಗಳ ಜೊತೆ ಬೆರೆತು ಬೋಧನಾ  ಚಟುವಟಿಕೆಯಲ್ಲಿ ತೊಡಗುವಂತೆ ಮಾಡಿದ್ದಾರೆ. ಈ ತರಹದ ಶಿಕ್ಷಕರು ನಮಗೆ ಭರವಸೆ ಮೂಡಿಸುತ್ತಾರೆ. ಇದೇ ಭರವಸೆಯೇ ನಮಗೆ ಮುನ್ನಡೆಯಲು ಪ್ರೇರಣೆ; ವ್ಯವಸ್ಥೆಯು ಸುಧಾರಿಸುತ್ತಿದೆ ಎಂಬುದನ್ನೂ ಇದೇ ಭರವಸೆ ಸಾಬೀತು ಮಾಡುತ್ತದೆ. .  ಮಕ್ಕಳ ಸಮಸ್ಯೆಗಳನ್ನು ಪರಿಹರಿಸಿ ಅವರ ಜೊತೆಗೂಡಿ ನಡೆಯುವ ಬದ್ಧತೆಯುಳ್ಳ ಹಾಗೂ ಇಂತಹ ಸೃಜನಾತ್ಮಕ ಒಳ್ಳೆಯ ಜನಗಳು ವ್ಯವಸ್ಥೆಯ ಒಳಗೇ ಇದ್ದಾರೆ ಎಂಬುದು ಮನವರಿಕೆಯಾಯಿತು.

ಈ ಹದಿಮೂರು ವರ್ಷಗಳಲ್ಲಿ ನಾವು ಕೆಲಸ ಮಾಡುತ್ತಿರುವ ಆರು ರಾಜ್ಯಗಳಲ್ಲಿ ಬೇರೆ ಬೇರೆ ರೀತಿಯ ಉತ್ತಮ ಶಾಲೆಗಳನ್ನು ಕಂಡಿದ್ದೇನೆ. ಪ್ರೊ॥ ಜಲಾಲುದ್ದೀನ್ ಹೇಳಿದಂತೆ, ಒಂದು ಶಾಲೆಯನ್ನು ಉತ್ತಮ ಶಾಲೆಯನ್ನಾಗಿ ರೂಪಿಸಲು ಹಲವಾರು ಕಾರಣಗಳಿವೆ. ಆದರೆ, ಆ ಶಾಲೆಗಳ ಭೇಟಿಗಳ ಬಗ್ಗೆ ಸಿಂಹಾವಲೋಕನ ನಡೆಸಿದಾಗ, ಉತ್ತಮ ಶಾಲೆಗಳಲ್ಲಿ ಎರಡು ಅಂಶಗಳು ಎದ್ದು ಕಾಣುತ್ತವೆ. ಒಂದು, ಶಿಕ್ಷಕರೆಲ್ಲರೂ ಒಗ್ಗೂಡಿ ಕೆಲಸ ಮಾಡುವುದು ಹಾಗೂ ಇನ್ನೊಂದು ಪ್ರಜಾತಾಂತ್ರಿಕ ನಾಯಕತ್ವ.

ಒಂದು ಒಳ್ಳೆಯ ಹಾಗೂ ಆರೋಗ್ಯಕರವಾದ ಸಂಬಂಧವೇ ಶಿಕ್ಷಕರ ತಂಡ ನಿರ್ಮಾಣವಾಗಿರುವುದಕ್ಕೆ ಅಡಿಪಾಯ. ಉತ್ತಮ ಶಾಲೆಗಳಿಗೆ ಭೇಟಿ ನೀಡಿದವರ ಮನಸೆಳೆಯುವುದೇ ಈ ತರಹದ ಶಿಕ್ಷಕರ ತಂಡ. ಈ ಶಿಕ್ಷಕರುತಮ್ಮೊಳಗೆ ಉತ್ತಮ ಸಂಬಂಧ ಹೊಂದಿದ್ದಾರೆ. "ಜನರು ಒಳ್ಳೆಯರಾಗಿರುವುದೇ ಇದಕ್ಕೆ ಕಾರಣ " ಎಂದು ಅವರು ಹೇಳಿದರೂ, ಉತ್ತಮ ಸಂಬಂಧದ ವಿಷಯಕ್ಕೆ ಬಂದಾಗ ಅದು ಸಂಪೂರ್ಣ ನಿಜವಲ್ಲ. ಇಂತಹ ಸಂಬಂಧವನ್ನು ಕಟ್ಟಿ ಬೆಳೆಸುವುದಕ್ಕೆ ಬಹಳ ಪರಿಶ್ರಮ ಹಾಕಬೇಕಾಗುತ್ತದೆ. ಜನರೊಡನೆ ಬೆರೆತು ಅವರನ್ನು ಅರ್ಥಮಾಡಿಕೊಳ್ಳಲು ಸಮಯ ಹಿಡಿಯುತ್ತದೆ. ಇನ್ನೊಬ್ಬರು ಕಷ್ಟದಲ್ಲಿರುವಾಗ ಇವರು ತಮ್ಮ ಸಾಮರ್ಥ್ಯಕ್ಕೂ ಮೀರಿ ಸಹಾಯಹಸ್ತ ಚಾಚುತ್ತಾರೆ. ನಿರಂತರವಾಗಿ ಹಾಗೂ ಪರಿಶ್ರಮವಹಿಸಿ ಈ ಕೆಲಸ ಮಾಡುತ್ತಾರೆ. ಒಬ್ಬ ಶಿಕ್ಷಕರು ಹೇಳಿದಂತೆ, ಆರಂಭದಲ್ಲಿ ಬಹಳ ಪರಿಶ್ರಮ ಹಾಗೂ ಸಮಯವನ್ನು ಬೇಡುತ್ತದೆ ಆದರೆ ನಂತರ ರೂಢಿಯಾಗುತ್ತದೆ. ಆದರೆ ನಿರ್ಲಕ್ಷಿಸುವಂತಿಲ್ಲ. ಆನಂತರದಲ್ಲಿ ಬಹಳ ಸುಲಲಿತವಾಗಿ ಹಾಗೂ ಇದುವೇ ಜೀವನದ ಪರಿ ಎಂದೆನಿಸಿ, ಹೀಗಿಲ್ಲದೇ ಹೋದಾಗ ಬಹಳ ಕಷ್ಟ ಎನಿಸುತ್ತದೆ.

ಗುಂಪಿನಲ್ಲಿ ಕೆಲಸ ಮಾಡುವುದೇ ಮಹತ್ವವಾದುದು. ಶಿಕ್ಷಕರೆಲ್ಲರೂ ಸಂಪೂರ್ಣವಾಗಿ ತೊಡಗಿಸಿಕೊಂಡು ಕೆಲಸ ಮಾಡುವುದೇ ಇಂತಹ ಶಾಲೆಗಳಲ್ಲಿ ಕಂಡುಬರುವ ದೃಶ್ಯ. ಏನೇ ಕೆಲಸವಾದರೂ ಶಿಕ್ಷಕರೆಲ್ಲರೂ ಒಟ್ಟುಗೂಡಿ ಮಾಡುವುದನ್ನು ಕಾಣಬಹುದು. ಬೆಳಗ್ಗಿನ ಸಭೆ, ಮಧ್ಯಾಹ್ನದ ಬಿಸಿಯೂಟ, ಸಮುದಾಯದೊಡನೆ ವ್ಯವಹರಿಸುವುದು ಅಥವಾ ಅಧಿಕಾರಿಗಳೊಡನೆ ವ್ಯವಹರಿಸುವುದಿರಬಹುದು ಎಲ್ಲ ಸಂದರ್ಭಗಳಲ್ಲಿಯೂ ಶಿಕ್ಷಕರು ಒಟ್ಟಾಗಿರುತ್ತಾರೆ. ಇಂತಹ ಶಾಲೆಗಳಲ್ಲಿ ಅಂದರೆ ಉದಾಹರಣೆಗೆ ಕಲಬುರ್ಗಿಯಲ್ಲಿರುವ ಶರಣ ಸಿರಸಗಿ ತಾಂಡಾ ಶಾಲೆಯ ಶಿಕ್ಷಕರ ಗುಂಪಿನಲ್ಲಿ ಹುರುಪಿನಿಂದ ಹಾಗೂ ಉಲ್ಲಾಸದಿಂದ ಕೂಡಿದ ಶಿಕ್ಷಕರಿದ್ದಾರೆ. ನಮಗೆಲ್ಲ ಗೊತ್ತಿರುವಂತೆ ಶಾಲೆಗಳಲ್ಲಿ ಇದೆಲ್ಲ ಸುಲಭವಾಗಿ ಆಗುವಂತಹುದಲ್ಲ. ಇದಕ್ಕೆ ಬಹಳ ತಯಾರಿಯ ಅಗತ್ಯವಿದೆ. ಶಿಕ್ಷಕರೆಲ್ಲರೂ ಒಂದು ತಂಡವಾಗಿ ತಮ್ಮಲ್ಲೇ ಚರ್ಚಿಸುತ್ತಾರೆ. ಯಾವುದಾದರೂ ಒಂದು ಕಾರ್ಯಕ್ರಮವನ್ನು ಆಯೋಜಿಸಬೇಕಾದಲ್ಲಿ ಯಾರ್ಯಾರು ಏನೇನು ಮಾಡಬೇಕು ಎಂದು ಚರ್ಚಿಸಿ, ಒಬ್ಬರು ಅಥವಾ ಇಬ್ಬರಿಗೆ ಹೊರೆಯಾಗದಂತೆ ನೋಡಿಕೊಳ್ಳುತ್ತಾರೆ. ಯಾವುದೇ ತೊಡಕಿಲ್ಲದೇ ಎಲ್ಲರ ಸಹಕಾರದಿಂದ ನಡೆಯಿತು ಎಂದು ಕಂಡರೂ, ಒಂದು ತಂಡದ ಸಾಧನೆಗೆ ಹಿನ್ನಲೆಯಲ್ಲಿ ಬಹಳಷ್ಟು ಕೆಲಸ ಮಾಡಬೇಕಾಗುತ್ತದೆ.

ಒಂದು ತಂಡವನ್ನು ಕಟ್ಟುವುದರಲ್ಲಿ ಸಭೆ ಸೇರುವ ಸಮಯ ಹಾಗೂ ಜಾಗ ಬಹಳ ಮಹತ್ವದ ಪಾತ್ರ ವಹಿಸುತ್ತದೆ. ಇಂತಹ ಬಹಳಷ್ಟು ಉತ್ತಮ ಶಾಲೆಗಳಲ್ಲಿ ಔಪಚಾರಿಕ ಸಭೆ ಸೇರಲು ನಿಗದಿಪಡಿಸುವ ಸಮಯಪಾಲನೆ ಕಂಡುಬರುವ ಒಂದು ಸಂಗತಿ. ಅನೌಪಚಾರಿಕ ವಾತಾವರಣವಿದ್ದರೂ ಶಿಕ್ಷಕರ ಸಭೆಗಳು ಬಹಳ ವ್ಯವಸ್ಥಿತವಾದ ಹಾಗೂ ನಿರ್ದಿಷ್ಟ ಉದ್ದೇಶ ಹೊಂದಿರುತ್ತವೆ. ವಿಧವಿಧವಾದ ಸಾಧ್ಯತೆಗಳಿವೆ. ಬಹಳಷ್ಟು ಶಾಲೆಗಳಲ್ಲಿ ಶನಿವಾರಗಳಂದು ಶಾಲೆಯ ಅವಧಿಯ ನಂತರ ಸಭೆ ನಡೆಸಲಾಗುತ್ತದೆ. ಆದರೆ ಕೆಲವು ಶಾಲೆಗಳಲ್ಲಿ, ಶಾಲೆ ಆರಂಭವಾಗುವ ಮುನ್ನ ಅಥವಾ ಶಾಲೆಯ ಅವಧಿಯ ನಂತರ ಸಭೆಯನ್ನು ನಡೆಸಲಾಗುತ್ತದೆ. ದಿನನಿತ್ಯದ ಈ ಸಭೆಗಳು ಕೇವಲ 15 ರಿಂದ 30 ನಿಮಿಷದ ಅವಧಿಯದ್ದಾಗಿರುತ್ತದೆ. ಆದರೆ ಇದರಿಂದ ತಮಗೆ ಬಹಳ ಅನುಕೂಲವಾಗುತ್ತದೆಂದು ಶಿಕ್ಷಕರು ಹೇಳುತ್ತಾರೆ. ಕಲಬುರ್ಗಿಯ ನಾಗನಹಳ್ಳಿಯಲ್ಲಿರುವ ಶಾಲೆಯಲ್ಲಿ, ಇಂತಹ ಶಿಕ್ಷಕರ ತಂಡವು ಶೈಕ್ಷಣಿಕ ವಿಷಯವಾಗಿ ಹಾಗೂ ಬೇರೆಬೇರೆ ವಿದ್ಯಾರ್ಥಿಗಳ ಬಗ್ಗೆ ವಿಸ್ತಾರವಾದ ಚರ್ಚೆಗಾಗಿ ತಮ್ಮ ಊಟದ ಸಮಯವನ್ನು ವಿನಿಯೋಗಿಸುತ್ತಾರೆ. ಮುಖ್ಯವಾಗಿ, ಕಾಳಜಿ ತೋರಬೇಕಾದ ಮಕ್ಕಳ ಬಗ್ಗೆ ಚರ್ಚಿಸುತ್ತಾರೆ. ಎಲ್ಲ ಶಿಕ್ಷಕರು ಕಡ್ಡಾಯವಾಗಿ ಹಾಜರಿದ್ದು ಚರ್ಚೆಯಲ್ಲಿ ಭಾಗವಹಿಸುವಂತೆ ನೋಡಿಕೊಳ್ಳುತ್ತಾರೆ. ಆಸಕ್ತಿಕರವಾದ ಒಂದು ಸಂಗತಿಯೆಂದರೆ, ಈ ಸಭೆಯಲ್ಲಿ ಶಿಕ್ಷಕರು ಒಂದು ನಿರ್ದಿಷ್ಟ ವಿಷಯದ ಬಗ್ಗೆ, ಅದರ ಯೋಜನೆಯ ಬಗ್ಗೆ, ಹಾಗೂ ನಿಭಾಯಿಸಲು ಕಷ್ಟಕರವಾದ ತಂಟಲುಮಾರಿ ಮಕ್ಕಳೊಂದಿಗೆ ವ್ಯವಹರಿಸುವುದರ ಬಗ್ಗೆ ಚರ್ಚಿಸುತ್ತಾರೆ. (ಯಾದಗಿರಿಯ ಸುರಪುರದ ಗಡ್ಡದ ನಾರಾಯಣ ತಾಂಡಾದ ಕಾಶಿಬಾಯಿ ಶಾಲೆಯಲ್ಲೂ ಇದೇ ರೀತಿಯ ಪ್ರಯತ್ನಗಳು ನಡೆಯುತ್ತಿವೆ).

ಕೆಲವು ಸಣ್ಣ ಸಣ್ಣ ವಿಷಯಗಳೂ ಒಂದು ತಂಡವನ್ನು ಕಟ್ಟುವಲ್ಲಿ ಪ್ರಮುಖ ಸ್ಥಾನ ಪಡೆಯುತ್ತವೆ. ಶಾಲೆಯಿಂದ ಹೊರಗೂ ಸಮಯ ಕಳೆಯುವುದು ಮುಖ್ಯ. ಸಹಶಿಕ್ಷಕರ ಮನೆಯಲ್ಲಿ ಚಹಾ ಕುಡಿಯಲಿರಬಹುದು ಅಥವಾ ಹೊಸ ಸ್ಥಳವನ್ನು ನೋಡುವುದೇ ಇರಬಹುದು. ಕಾರಣ ಏನೇ ಇರಬಹುದು, ಅದರಿಂದ ಸಹಾಯವಾಗುತ್ತದೆ. ಆದರೆ ಶಿಕ್ಷಕರು ಗುರುತಿಸುವಂತಹ ಬಹು ಮುಖ್ಯ ಅಂಶವೆಂದರೆ ತಂಡದೊಳಗೆ ನಿರಂತರ ಕಲಿಕೆ ಹಾಗೂ ಬೆಳವಣಿಗೆ. ತಮಗೆ ತಿಳಿದಿರುವುದನ್ನು ಇತರರೊಡನೆ ಹಂಚಿಕೊಳ್ಳುವುದು ಹಾಗೂ ಇತರರಿಂದ ತಿಳಿದುಕೊಳ್ಳುವುದು ಸೂಕ್ಷ್ಮವಾಗಿಯೇ ನಡೆಯುವಂತಹ ಪ್ರಕ್ರಿಯೆ. ಶಿಕ್ಷಕರು ಒಂದು ನಿರ್ದಿಷ್ಟ ವಿಷಯದ ಬಗ್ಗೆ ಲೇಖನವನ್ನು ಓದಿ ಚರ್ಚಿಸುವುದನ್ನು ನಾನು ನೋಡಿಲ್ಲ. ಆದರೆ, ಶಿಕ್ಷಣ ಹಾಗೂ ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿರುವುದರ ಬಗೆ ಚರ್ಚೆ ನಡೆಯುತ್ತದೆ. ತಾವು ಓದಿದ ಪುಸ್ತಕದ ವಿಷಯವನ್ನು ಇತರರೊಡನೆ ಹಂಚಿಕೊಳ್ಳುತ್ತಾರೆ. ಅತಿ ಮುಖ್ಯ ವಿಷಯವೆಂದರೆ ವೃತ್ತಪತ್ರಿಕೆಗಳಿಗೆ ಹಾಗೂ ನಿಯತಕಾಲಿಕೆಗಳಿಗೆ ಲೇಖನಗಳನ್ನು ಬರೆಯಲು ಒಬ್ಬರನ್ನೊಬ್ಬರು ಹುರಿದುಂಬಿಸುತ್ತಾರೆ. ತಾವೇ ಸಂಶೋಧನಾ ಪ್ರಬಂಧಗಳನ್ನು ಬರೆಯುವುದಾಗಲೀ ನಿಯತಕಾಲಿಕೆಗಳಲ್ಲಿ ಇತರರು ಬರೆದಿರುವ ಪ್ರಬಂಧಗಳ ಬಗೆಗಾಗಲೀ ಚರ್ಚಿಸುವುದಿಲ್ಲ ಎಂಬುದು ಸತ್ಯವೇ. ಇತರರ ಪ್ರಬಂಧಗಳನ್ನು ಟೀಕಿಸುವುದಿಲ್ಲ. ಆದರೆ ಚರ್ಚೆ ವೈಯಕ್ತಿಕವಾಗಿರುವುದಿಲ್ಲ. ಅದು ಶಿಕ್ಷಣ ಹಾಗೂ ಮಗುವಿನ ಸರ್ವಾಂಗೀಣ ಬೆಳವಣಿಗೆಯ ಬಗ್ಗೆಯೇ ಇರುತ್ತದೆ.

ಶಿಕ್ಷಕರು ತಂಡದಲ್ಲಿ ಕೆಲಸ ಮಾಡುವುದು ಬಹು ಮುಖ್ಯ. ಆದರೆ, ಅದು ತಾನಾಗಿಯೇನಡೆಯುವ ಕೆಲಸವಲ್ಲ. ಈ ಎಲ್ಲ ಪ್ರಕ್ರಿಯೆಗಳು ಒಬ್ಬ ನಾಯಕನ ಮುಂದಾಳತ್ವದಲ್ಲಿಯೇ ನಡೆಯಬೇಕು. ಅತ್ಯುತ್ತಮ ಸಾಮರ್ಥ್ಯ ಹೊಂದಿರುವ ನಾಯಕ, ದೂರದೃಷ್ಟಿ ಉಳ್ಳ ನಾಯಕ, ಮೌಲ್ಯಗಳನ್ನು ಹೊಂದಿರುವ ನಾಯಕ ಹಾಗೂ ತಂಡದಲ್ಲಿ ಕೆಲಸ ಮಾಡುವುದನ್ನು ನಂಬುವ ನಾಯಕ - ಹೀಗಿರುವ ಒಳ್ಳೆಯ ನಾಯಕರನ್ನು ಇಂತಹ ಶಾಲೆಗಳಲ್ಲಿ ಕಾಣಬಹುದು. ಇವರು ನಾಯಕತ್ವಕ್ಕೆ ಮಾದರಿಯೇ ಸರಿ. ಒಂದು ಉತ್ತಮ ಶಾಲೆಯ ಪ್ರಾಂಶುಪಾಲರು ಹೇಗೆ ಕಾರ್ಯ ನಿರ್ವಹಿಸುತ್ತಾರೆ ಎಂದು

ತಿಳಿಯಲು ನನ್ನ ಸುರಪುರದ ದಿನಗಳಿಂದ (2007ರಿಂದ) ನನಗೆ ಪರಿಚಯವಿರುವ ಶರಣಬಸಪ್ಪ ನಾಸಿಯವರ (ಮುಖ್ಯೋಪಾಧ್ಯಾಯರು, ಆನಾಪುರ ಶಾಲೆ, ಯಾದಗಿರಿ) ಉದಾಹರಣೆಯನ್ನು ಹೇಳುತ್ತೇನೆ.

ನಾಸಿ ಒಬ್ಬ ದೂರದೃಷ್ಟಿಯುಳ್ಳ ವ್ಯಕ್ತಿ. ಎಲ್ಲಿಗೆ ಹೋದರೂ ಆ ಸ್ಥಳವನ್ನು ಉತ್ತಮಗೊಳಿಸುವ ಕನಸನ್ನು ಕಾಣತೊಡಗುತ್ತಾರೆ. ಎರಡು ಬಾರಿ ಮುಖ್ಯ ಶಿಕ್ಷಕರಾಗಿ ಹಾಗೂ ಒಮ್ಮೆ ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಯಾಗಿ ಕೆಲಸ ನಿರ್ವಹಿಸಿದವರು. ಜವಾಬ್ದಾರಿ ಯಾವುದಾದರೂ ಆಗಿರಬಹುದು. ಇರುವುದನ್ನು ಇನ್ನೂ ಹೇಗೆ ಉತ್ತಮಪಡಿಸಬಹುದು ಎನ್ನುವುದರ ಬಗ್ಗೆಯೇ ಸದಾ ಅವರ ಚಿಂತನೆ. ತಮ್ಮ ಕಲ್ಪನೆಗಳನ್ನು ತನ್ನ ಸಹೋದ್ಯೋಗಿಗಳೊಂದಿಗೆ ಹಂಚಿಕೊಳ್ಳುತ್ತಾರೆ. ತನ್ನ ಸಿಬ್ಬಂದಿಗಳಿಗೆ ಹಾಗೂ ಸಹಶಿಕ್ಷಕರಿಗೆ ಮನವರಿಕೆ ಮಾಡಿಕೊಡಲು ಸಾಕಷ್ಟು ಸಮಯವನ್ನು ವಿನಿಯೋಗಿಸುತ್ತಾರೆ. "ಒಬ್ಬಬ್ಬರೊಡನೆಯೂ ಶಾಲೆಯ ಬಗೆಗಿನ ಅವರ ಕಲ್ಪನೆಯನ್ನು ರೂಪಿಸಲು ಸಂವಾದ ನಡೆಸುತ್ತೇನೆ" ಎಂದು ಅವರು ಹೇಳುತ್ತಾರೆ. ಒಮ್ಮೊಮ್ಮೆ ಅವರ ಗೆಳೆಯರು ಹಾಗೂ ತಂಡದಲ್ಲಿರುವ ಇತರ ಶಿಕ್ಷಕರು ಒಬ್ಬ ಶಿಕ್ಷಕನ ಮೇಲೆ ಏಕಿಷ್ಟು ಸಮಯವನ್ನು ವ್ಯರ್ಥಮಾಡುತ್ತೀ ಎಂದು ಆಕ್ಷೇಪಿಸುತ್ತಾರೆ. ಆದರೆ, ನಾಸಿ ಈ ವಿಷಯದಲ್ಲಿ ಪಟ್ಟು ಬಿಡುವುದಿಲ್ಲ. ತಂಡದಲ್ಲಿ ಸಾಮರಸ್ಯವನ್ನು ಬೆಳೆಸಬೇಕಾದರೆ, ಒಬ್ಬೊಬ್ಬ ಶಿಕ್ಷಕನ ಜೊತೆಗೂ ಸಮಯ ಕಳೆಯಬೇಕಾಗುತ್ತದೆ ಎನ್ನುತ್ತಾರೆ. ಸರಪಣಿಯು ಅದರ ದುರ್ಬಲ ಕೊಂಡಿಯಷ್ಟು ಮಾತ್ರವೇ ಬಲವಾಗಿರುತ್ತದೆ. ಕೆಲವರು ತಕ್ಷಣ ಅರ್ಥಮಾಡಿಕೊಳ್ಳುತ್ತಾರೆ; ಇನ್ನೂ ಕೆಲವರಿಗೆ ಸಮಯ ಹಿಡಿಯುತ್ತದೆ, ಆದರೆ ನಾಯಕರೆನಿಸಿಕೊಂಡವರು ಪ್ರತಿಯೊಬ್ಬರೊಡನೆಯೂ ಕೆಲಸ ಮಾಡಬೇಕಾಗುತ್ತದೆ. ಒಂದು ಬಾರಿ ಈ ಕೆಲಸ ಸಾಧಿಸಿದರೆ, ಸಮಾನ ತಿಳುವಳಿಕೆಯುಳ್ಳ ಹಾಗೂ ದೂರದೃಷ್ಟಿಯುಳ್ಳ ತಂಡವನ್ನು ಕಟ್ಟುವುದು ಸುಲಭ ಎನ್ನುತ್ತಾರೆ. ತಂಡದೊಳಗಿನ ತಿಳುವಳಿಕೆ ನಿಂತ ನೀರಲ್ಲ ಎನ್ನುತ್ತಾರೆ. ಇದು ಬಹಳ ಕ್ರಿಯಾತ್ಮಕವಾಗಿರುತ್ತದೆ, ನಿರಂತರ ಸಂವಹನವದ ಪ್ರಕ್ರಿಯೆಯು ಎಂದಿಗೂ ತಟಸ್ಥವಾಗಬಾರದು. ತಮ್ಮ ಕಲ್ಪನೆಯ ಬಗ್ಗೆ ಒಂದು ಸ್ಪಷ್ಟತೆ ಹಾಗೂ ಉತ್ಸಾಹ, ತಂಡವು ಮುನ್ನಡೆಯುವಲ್ಲಿ ಬಹಳ ಮುಖ್ಯ ಪಾತ್ರವಹಿಸುತ್ತದೆ. ಒಬ್ಬ ನಾಯಕನಿಗೆ ಕಲ್ಪನೆ ಇರಬೇಕು, ಆದರೆ ಒಬ್ಬ ಒಳ್ಳೆಯ ನಾಯಕನಿಗೆ, ಆ ಕಲ್ಪನೆಯು ಇಡೀ ತಂಡದ ಕಲ್ಪನೆಯಾಗಬೇಕು. ಕಲ್ಪನೆಯನ್ನು ಅಭಿವೃದ್ಧಿಗೊಳಿಸುವುದು ಎನ್ನುವುದಕ್ಕಿಂತ ತಂಡದ ಒಳಗಿನಿಂದ ವಿಕಸಿತಗೊಳಿಸುವುದೇ ನಿಜವಾದ ಕೌಶಲ. ಎಲ್ಲ ಸಂದರ್ಭಗಳಲ್ಲೂ ನಾಸಿ ಇದನ್ನು ಕುಶಲತೆಯಿಂದ ಸಾಧಿಸಿದ್ದಾರೆ ಹಾಗೂ ಇಲ್ಲಿಯವರೆಗೆ ಯಶಸ್ವಿಯೂ ಆಗಿದ್ದಾರೆ.

ಯೋಜನೆಯನ್ನು ರೂಪಿಸುವುದು ನಾಸಿಯವರ ಸಾಮರ್ಥ್ಯ ಹಾಗೂ ಹಲವು ಮುಖ್ಯ ಶಿಕ್ಷಕರು ಇದಕ್ಕಾಗೇ ಇವರನ್ನು ಇಷ್ಟಪಡುತ್ತಾರೆ. ತಮ್ಮ ಕಲ್ಪನೆಗೆ ಒಂದು ಸ್ಪಷ್ಟ ರೂಪವನ್ನು ಕೊಡುವ ಯೋಜನೆಯನ್ನು ಬಹಳ ಧೃಡವಾಗಿ ಕೈಗೊಳ್ಳುತ್ತಾರೆ. ಅತ್ಯಂತ ಕ್ರಿಯಾಶೀಲ ಹಾಗೂ ಸವಾಲಿನದಾದ ವಿವರವಾದ ಯೋಜನೆಗಳನ್ನು ರೂಪಿಸುವುದರಲ್ಲಿ ನಾಸಿ ಸಿದ್ಧಹಸ್ತರು ಎಂದು ಅವರ ತಂಡದ ಸದಸ್ಯರು ಹೇಳುತ್ತಾರೆ. ಒಂದು ಕಾರ್ಯವನ್ನು ಅದರ ಕೊನೆಯ ಹಂತದವರೆಗೂ ಮುಟ್ಟಿಸುವುದು ನಾಸಿಯವರ ಸಾಮರ್ಥ್ಯ. ಯಾವುದೇ ಒಂದು ಯೋಜನೆಯ ಬಗ್ಗೆ ನಾಸಿ ತನ್ನ ತಂಡದವರೊಂದಿಗೆ ಸೇರಿಯೇ ಕೆಲಸ ಮಾಡುತ್ತಾರೆ.

ನಾಸಿ ಕಾರ್ಯದಲ್ಲೂ ಭಾಗವಹಿಸುತ್ತಾರೆ. ಈ ಬಗ್ಗೆ ಕೇಳಿದರೆ, ಅವರ ಉತ್ತರ "ನಾನು ಅಷ್ಟು ಜಾಣನಲ್ಲ. ಶ್ರಮಪಟ್ಟು ಕೆಲಸ ಮಾಡುತ್ತೇನೆ ಅಷ್ಟೇ. ಸರಿಯಾಗಿ ತಯಾರಿ ಮಾಡುತ್ತೇನೆ. ಓದುತ್ತೇನೆ ಹಾಗೂ ತಿಳಿದವರ ಹತ್ತಿರ ಮಾತನಾಡಿ ತಯಾರಾಗುತ್ತೇನೆ". ಶಿಕ್ಷಕ ಕಲಿಕಾ ಕೇಂದ್ರ ಹಾಗೂ ಜಿಲ್ಲಾ ಸಂಸ್ಥೆಗೆ ತಪ್ಪದೇ ಭೇಟಿ ನೀಡುತ್ತಾರೆ. ಜನರೊಡನೆ ಬೆರೆತು ಮಾತನಾಡುತ್ತಾರೆ. ನಾಸಿ ಓದುತ್ತಾರೆ ಕೂಡಾ. ತಾವು ಓದಿದ್ದರ ಬಗ್ಗೆ ಇತರರೊಡನೆ ಚರ್ಚಿಸುತ್ತಾರೆ. ತರಬೇತಿ ಕಾರ್ಯಾಗಾರಗಳಲ್ಲಿ ತಾವೂ ಭಾಗವಹಿಸಿ ಇತರ ಶಿಕ್ಷಕರೂ ಭಾಗವಹಿಸುವಂತೆ ಪ್ರೋತ್ಸಾಹಿಸುತ್ತಾರೆ. ತರಗತಿಗಳನ್ನೂ ತೆಗೆದುಕೊಳ್ಳುತ್ತಾರೆ. ತಮ್ಮ ನಿಗದಿತ ತರಗತಿಗಳನ್ನೂ ನಿಭಾಯಿಸುತ್ತ ಬೇರೆ ಶಿಕ್ಷಕರ ಅನುಪಸ್ಥಿತಿಯಲ್ಲಿ ಅವರ ತರಗತಿಗಳನ್ನೂ ತೆಗೆದುಕೊಳ್ಳುತ್ತಾರೆ. ಈ ಗುಣದಿಂದಾಗಿ ತಂಡದ ಸದಸ್ಯರಲ್ಲಿ ಅವರ ಬಗ್ಗೆ ಗೌರವ ಹೆಚ್ಚಿದೆ. ನಡೆಯಿಂದ ಮಾದರಿಯಾಗಿದ್ದಾರೆ ಕೂಡ. ಪುಸ್ತಕಗಳನ್ನು ಓದಿ ಅದರಲ್ಲಿರುವ ವಿಷಯವನ್ನು ತನ್ನ ತಂಡದವರೊಡನೆ ಹಂಚಿಕೊಳ್ಳುವ ಸ್ವಭಾವ ಅವರದ್ದು. ಇದರ ಪರಿಣಾಮವಾಗಿ ತಂಡದ ಇತರ ಸದಸ್ಯರೂ ಪುಸ್ತಕಗಳನ್ನು ಓದಿ ಇತರರೊಡನೆ ಹಂಚಿಕೊಳ್ಳುವ ಪರಿಪಾಠ ಬೆಳೆಯುತ್ತಿದೆ.

ನಾಸಿ ಪ್ರಜಾತಾಂತ್ರಿಕ ಮೌಲ್ಯಗಳನ್ನು ಪಾಲಿಸುತ್ತಾರೆ. ಯಾವುದೇ ವಿಷಯವಿರಬಹುದು- ದೊಡ್ಡದೋ, ಸಣ್ಣದೋ, ದಿನನಿತ್ಯದ ಆಗುಹೋಗುಗಳ ಬಗ್ಗೆಯೋ ಅಥವಾ ಮುಖ್ಯವಾದ ವಿಷಯದ ಬಗ್ಗೆಯೋ ತನ್ನ ತಂಡದ ಇತರ ಸದಸ್ಯರೊಡನೆ ಸಮಾಲೋಚಿಸುತ್ತಾರೆ. ಸಭೆಗಳು ಬಹಳ ಮುಕ್ತವಾಗಿ ಹಾಗೂ ಪಾರದರ್ಶಕವಾಗಿರುತ್ತವೆ. ನಾಸಿಯವರ ನಾಯಕತ್ವದಲ್ಲಿ ಆಕರ್ಷಿಸುವ ವಿಷಯವಾವುದು? ಅವರ ಶಿಕ್ಷಕರ ಪ್ರಕಾರ ಅವರು ಶೈಕ್ಷಣಿಕ ನಾಯಕತ್ವವನ್ನು ಒದಗಿಸುತ್ತಾರೆ. ನಾಸಿ ಏನೇ ಮಾಡಿದರೂ, ಅವರ ಗಮನ ಕಲಿಕೆಯ ಬಗ್ಗೆಯೇ ಇರುತ್ತದೆ ಎನ್ನುತ್ತಾರೆ. ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ಹೇಗೆ ಒದಗಿಸುವುದು. ಮಕ್ಕಳಿಗೆ ಕಲಿಕೆಯನ್ನು ಆಸಕ್ತಿಕರವಾಗಿಯೂ ಕುತೂಹಲಕರವಾಗಿಯೂ ಮಾಡುವುದು ಹೇಗೆ? ಮಕ್ಕಳಿಗೆ ಉತ್ತಮ ಕಲಿಕಾ ವಾತಾವರಣವನ್ನು ಕಲ್ಪಿಸುವುದು ಹೇಗೆ. ಶಿಕ್ಷಕರ ನಿರಂತರ ಕಲಿಕಾ ಪ್ರಕ್ರಿಯೆ ಹಾಗೂ ಅಭಿವೃದ್ಧಿಯ ಚೌಕಟ್ಟನ್ನು ಹೇಗೆ ರಚಿಸುವುದು? ಈ ಎಲ್ಲ ಅಂಶಗಳೂ ನಾಸಿಯವರ ಶಾಲೆಯನ್ನು ಒಂದು ಫಲಪ್ರದವಾದ ಉತ್ತಮ ಶಾಲೆಯನ್ನಾಗಿಸಿವೆ. ಇಲ್ಲಿ ಉರು ಹೊಡೆಯುವ ಕಲಿಕೆ ಇಲ್ಲ. ಯಾವುದೇ ಭಯವಿಲ್ಲದೆ ಮಕ್ಕಳು ಹಾಗೂ ಶಿಕ್ಷಕರಿಬ್ಬರೂ ಸಂತೋಷವಾಗಿದ್ದಾರೆ. ಮಕ್ಕಳಷ್ಟೇ ಏಕೆ ನಾವು ಸಹ ನಾಸಿಯವರ ಶಾಲೆಯಲ್ಲಿರಲು ಇಷ್ಟಪಡುತ್ತೇವೆ.

2006ರಲ್ಲಿ ಕಲಿಕಾ ಭರವಸೆ ಕಾರ್ಯಕ್ರಮದಡಿ 3 ಬಾರಿ ಗೆದ್ದವರ (15 ಶಾಲೆಗಳು) ಕುರಿತು ನಡೆದ ವಿಷಯ ಅಧ್ಯಯನದ ವರದಿಯೂ ಇದೇ ರೀತಿಯ ನಿರ್ಣಯವನ್ನು ನೀಡಿತು. ಗೆದ್ದ ಶಾಲೆಗಳಲ್ಲಿ ಕೆಲವು ಸಮಾನ ಅಂಶಗಳಿದ್ದವು, ಅವುಗಳೆಂದರೆ: ಬದ್ಧತೆಯುಳ್ಳ ಮುಖ್ಯ ಶಿಕ್ಷಕ, ತಮ್ಮೊಳಗೂ ಹಾಗೂ ಸಮುದಾಯದೊಡನೆಯೂ ಸೌಹಾರ್ದಯುತ ಬಾಂಧವ್ಯ ಹೊಂದಿದ ಶಿಕ್ಷಕರು. ಅಲ್ಲದೇ, ಈಶಾನ್ಯ ಕರ್ನಾಟಕದ ಉದ್ದಗಲಕ್ಕೂ ಶಾಲೆಗಳನ್ನು ಅವಲೋಕಿಸಿದಾಗ, ಅನೇಕ ಕ್ರಿಯಾಶೀಲ ಶಾಲೆಗಳನ್ನು ಕಾಣುತ್ತೇವೆ. ಈ ಶಾಲೆಗಳು ಹೇಗೆ ಕೆಲಸ ಮಾಡುತ್ತವೆ ಎಂದು ಸೂಕ್ಷ್ಮವಾಗಿ ಗಮನಿಸಿದಾಗ, ಎರಡು ಅಂಶಗಳು ಎದ್ದು ಕಾಣುತ್ತವೆ. ಮೊದಲನೆಯದು, ಶಿಕ್ಷಕರು ಒಂದು ತಂಡವಾಗಿ ಕೆಲಸ ಮಾಡುವುದು ಹಾಗೂ ಎರಡನೆಯದು, ಒಬ್ಬ

ಒಳ್ಳೆಯ ಪ್ರಜಾತಾಂತ್ರಿಕ ಗುಣವುಳ್ಳ ನಾಯಕನಿದ್ದು, ಶೈಕ್ಷಣಿಕ ಕೆಲಸವನ್ನು ಈ ಪ್ರಕ್ರಿಯೆಯ ಪ್ರಮುಖ ಅಂಶವನ್ನಾಗಿಸಿ, ತನ್ನ ತಂಡವನ್ನು ಒಟ್ಟಾಗಿ ಸಂತೋಷದಿಂದ ಕೆಲಸ ಮಾಡುವ ಹಂತಕ್ಕೆ ಕೊಂಡೊಯ್ಯುತ್ತಾನೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ, ಪ್ರೊ॥ ಜಲಾಲುದ್ದೀನ್ ಅವರ ಮಾತುಗಳನ್ನು ಮರೆಯಲಾಗದು- "ಉತ್ತಮ ಶಾಲೆ ರೂಪಿಸಲು ಬೇಕಾದುದು ಏನು? ಹುಡುಕಾಟದಲ್ಲಿ ಅರ್ಥವಿಲ್ಲ, ಕೆಲಸಕ್ಕೆ ಇಳಿಯಬೇಕಷ್ಟೆ".

---

ಉಮಾಶಂಕರ್ ಅವರು ಅಜೀಮ್ ಪ್ರೇಮ್‌ಜಿ ಫೌಂಡೇಶನ್, ಕರ್ನಾಟಕ ರಾಜ್ಯ ಇದರ ಮುಖ್ಯಸ್ಥರು. ಅಭಿವೃದ್ಧಿ ಕ್ಷೇತ್ರದಲ್ಲಿ ಅವರಿಗೆ ಅಪಾರ ಅನುಭವವಿದೆ. ರಾಷ್ಟ್ರೀಯ ಸಾಕ್ಷರತಾ ಅಭಿಯಾನ ಹಾಗೂ ಕರ್ನಾಟಕದ ಬಿ ಆರ್ ಹಿಲ್ಸ್‌ನಲ್ಲಿ ಬುಡಕಟ್ಟು ಶಿಕ್ಷಣಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಅವರೇ ಹೇಳುವಂತೆ ಬರಿಗಾಲ ಸಂಶೋಧನೆಯಡಿ, ತಳಮಟ್ಟದಲ್ಲಿ ಕೆಲಸ ಮಾಡುವವರನ್ನು ಹಾಗೂ ಪ್ರಾಥಮಿಕ ಶಾಲಾ ಶಿಕ್ಷಕರನ್ನು ತರಬೇತುಗೊಳಿಸುತ್ತಿದ್ದಾರೆ. ಇವರು ಕರ್ನಾಟಕ ರಾಜ್ಯ ತರಬೇತುದಾರರ ಒಕ್ಕೂಟದ ಸ್ಥಾಪಕ ಸದಸ್ಯರೂ ಆಗಿದ್ದಾರೆ. ಇವರನ್ನು ಸಂಪರ್ಕಿಸಲು ವಿಳಾಸ : periodi@azimpremjifoundation.org